WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮಾರ್ಚ್ ೧೫, ೨೦೧೨ (ಫಾಲ್ಗುಣ ೨೫, ಶಕ ವರ್ಷ ೧೯೩೩) | ಸಂಚಿಕೆ ೧೧ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

### ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ನಅಇ 46 ಗುಅಪ್ರಾ 2011, ಬೆಂಗಳೂರು, ದಿನಾಂಕ : 17–2–2011.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಪ್ರಕರಣ 2(7)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ಸರ್ಕಾರವು ಬೀದರ್ ಜಿಲ್ಲೆ, ಔರಾದ್ ಪಟ್ಟಣದ ಪಂಚಾಯಿತಿ ಗಡಿಯ ಕ್ಷೇತ್ರವನ್ನೇ ಔರಾದ್ ಸ್ಥಳೀಯ ಯೋಜನಾ ಪ್ರದೇಶವೆಂದು ದಿನಾಂಕ : 1–1–2012 ರಿಂದ ಜಾರಿಗೆ ಬರುವಂತೆ ಈ ಮೂಲಕ ಘೋಷಿಸಿದೆ. ಸದರಿ ಪಟ್ಟಣ ಪಂಚಾಯಿತಿಯೇ ಯೋಜನಾ ಪ್ರಾಧಿಕಾರದ ಕೆಲಸ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 146**

### ಆರ್ಥಿಕ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆಇ 130 ವೆಚ್ಚ–12/2012, ಬೆಂಗಳೂರು, ದಿನಾಂಕ : 18–2–2012.**

ಮಾನ್ಯ ವಿಧಾನಸಭಾ ಸದಸ್ಯರುಗಳಿಗೆ Apple I Pad 2 64 GB 3G+WiFi ಗಣಕಯಂತ್ರಗಳನ್ನು ತರಬೇತಿ ಮತ್ತು Polyurethane smart cover ಸಹಿತ ನೀಡಲು Apple India ಸಂಸ್ಥೆಯ ಅಧಿಕೃತ ಮಾರಾಟಗಾರರಾದ ಮೆ. ACE Tech Systems Pvt. Ltd. ಅವರ ಮುಖಾಂತರ ಒಟ್ಟು 225 ಐ–ಪ್ಯಾಡ್‌ಗಳನ್ನು ರೂ. 103.50 ಲಕ್ಷಗಳ ವೆಚ್ಚದಲ್ಲಿ ನೇರವಾಗಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಕರ್ನಾಟಕ ವಿಧಾನಸಭಾ ಸಚಿವಾಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ Apple I Pad ಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕರ್ನಾಟಕ ವಿಧಾನ ಸಭಾ ಸಚಿವಾಲಯವು ದೃಢಪಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 147**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 90 ಸಿಎಸ್‌ಎಸ್ 2009, ಬೆಂಗಳೂರು, ದಿನಾಂಕ : 13–2–2012.**

ಸರ್ಕಾರದಿಂದ ಈ ಹಿಂದೆ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಕೆ.ವಿ. ಯೋಗೇಶ್ ಬಿನ್ ವಿರೇಗೌಡ, ಕಾರ್ಜುವಳ್ಳಿ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ ಇವರನ್ನು ಹಾಸನ ಜಿಲ್ಲೆ ಆಲೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಆಲೂರು ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಜಿ. ಪಾಟೀಲ್,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

**ಪಿ.ಆರ್. 148**

## KARNATAKA GOVERNOR'S SECRETARIAT

### NOTIFICATION

**No. GS 31 BUM 2011, Bangalore, dated : 2nd March 2012.**

Whereas an Inquiry Commission consisting of Justice Shri K. Shivashankar Bhat, retired Judge, High Court of Karnataka has been constituted to conduct an Inquiry into certain allegations of large scale malpractices in the examinations conducted at the Distance Education Centres and the matters relating to Kolar P.G. Centre and certain other matters of Bangalore University, vide Notification No. GS 31 BUM 2011, dated 24th Dec. 2011, under section 8(1) of the Karnataka State Universities Act, 2000.

And, whereas, the State Government has requested the Chancellor to constitute an Inquiry Commission under section 8(1) of the Karnataka State Universities Act, 2000, to inquire into the allegations of financial and administrative malpractices against the Directorate of Distance Education, Bangalore University.

Now, therefore, in exercise of the powers conferred on me by section 8(1) of the Karnataka State Universities Act, 2000 read with section 21 of the Karnataka General Clauses Act, 1899, I, H.R. Bhardwaj, Governor of Karnataka and Chancellor of the Universities in Karnataka, hereby order inclusion of an additional term of reference in the Notification No. GS 31 BUM 2011 dated 24th December 2011 covering the following matters, namely ;

> "(1A) Allegations of financial and administrative malpractices against the Directorate of Distance Education, Bangalore University"

**H.R. BHARDWAJ**
Governor of Karnataka &
Chancellor of Universities

**V.S. JERE**
Under Secretary to Governor

**P.R. No. 150**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 14 ಎಲ್‌ಜಿಎನ್ 2009, ಬೆಂಗಳೂರು, ದಿನಾಂಕ : 22–2–2012.**

ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಸಬ್ ಸೆಕ್ಷನ್ (1) 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಉತ್ತರ ಕನ್ನಡ ಜಿಲ್ಲೆಯ ಕಾರವಾರ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಕೆಳಕಂಡಂತೆ ರಚಿಸಲಾಗಿದೆ.

| ಕ್ರಮ ಸಂಖ್ಯೆ | ತಾಲ್ಲೂಕು | ಸದಸ್ಯರು | ವರ್ಗ |
|---|---|---|---|
| 1. | ಕಾರವಾರ | ಮಾನ್ಯ ಶಾಸಕರು, ಕಾರವಾರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2. | | ಶ್ರೀ ಶಾಂತಾ ಭಿಕ್ಕು ಬಾಂದೇಕರ, ಸಾ: ಹಿಂದುವಾಡಾ ಅಂಚೆ : ಮಲ್ಲಾಪುರ ಕಾರವಾರ | ಸದಸ್ಯರು (ಸಾಮಾನ್ಯ) |
| 3. | | ಶ್ರೀಮತಿ ಅಂಬಾ ವೈಂಗಣಕರ್, ಸೀಬರ್ಡ್ ಕಾಲೋನಿ, ಚಿತ್ತಾಕುಲಾ, ಅಂಚೆ : ಚಿತ್ತಾಕುಲಾ, ಕಾರವಾರ | ಸದಸ್ಯರು ಮಹಿಳೆ |
| 4. | | ಶ್ರೀ ರಾಮಕುಮಾರ, ತೇವಪ್ಪಾ ಬೋರಕರ, "ಮಂಜುನಾಥ ಕೃಷಾ" ನಂ. 17, ಕೆ.ಹೆಚ್.ಬಿ. ಕಾಲೋನಿ, ಬಾಡ, ಅಂಚೆ : ನಂದನಗದ್ದಾ, ತಾಲ್ಲೂಕು, ಕಾರವಾರ | ಸದಸ್ಯರು (ಪರಿಶಿಷ್ಟ ಜಾತಿ) |
| 5. | | ತಹಶೀಲ್ದಾರ, ಕಾರವಾರ ತಾಲ್ಲೂಕು, ಕಾರವಾರ | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಕೃಷ್ಣಪ್ಪ,**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ,–2).

**ಪಿ.ಆರ್. 151**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 13 ಎಲ್‌ಜಿಎನ್ 2009, ಬೆಂಗಳೂರು, ದಿನಾಂಕ : 22–2–2012.**

ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಸಬ್ ಸೆಕ್ಷನ್ (1) 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಕೆಳಕಂಡಂತೆ ರಚಿಸಲಾಗಿದೆ.

| ಕ್ರಮ ಸಂಖ್ಯೆ | ತಾಲ್ಲೂಕು | ಸದಸ್ಯರು | ವರ್ಗ |
|---|---|---|---|
| 1. | ಅಂಕೋಲಾ | ಮಾನ್ಯ ಶಾಸಕರು, ಅಂಕೋಲಾ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2. | | ಶ್ರೀ ಕೃಷ್ಣಕುಮಾರ್, ವಿ.ಮಹಾಲೆ, ಮಠಾಕೇರಿ, ಅಂಕೋಲಾ | ಸದಸ್ಯರು (ಸಾಮಾನ್ಯ) |
| 3. | | ಶ್ರೀ ಶೇಖರ ಸೋಮಯ್ಯ, ಹಳ್ಳೇರ, ಸಾ: ಬಳಲೆ, ಸಗಡಗೇರಿ, ಪಂಚಾಯತ್, ಅಂಕೋಲಾ ತಾಲ್ಲೂಕು | ಸದಸ್ಯರು (ಪರಿಶಿಷ್ಟ ಜಾತಿ) |
| 4. | | ಶ್ರೀಮತಿ ಸುರಕ್ಷಾ ಸುರೇಶ ಭೋವಿ, ಸಾ : ಕನಸಿಗದ್ದೆ, ಬಬ್ರುವಾಡಾ, ಅಂಕೋಲಾ ತಾಲ್ಲೂಕು | ಸದಸ್ಯರು (ಪರಿಶಿಷ್ಟ ಜಾತಿ) |
| 5. | | ತಹಶೀಲ್ದಾರ, ಅಂಕೋಲಾ ತಾಲ್ಲೂಕು, ಅಂಕೋಲಾ | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಕೃಷ್ಣಪ್ಪ,**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ,–2)

**ಪಿ.ಆರ್. 152**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 130 ಎಲ್‌ಡಬ್ಲ್ಯೂಎ 2011, ಬೆಂಗಳೂರು, ದಿನಾಂಕ : 24–2–2012.**

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ : 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ "ಇಂಡಸ್ಟ್ರಿ ಜನರೇಟಿಂಗ್ ಪವರ್" ಉದ್ಯಮವನ್ನು ಅಧಿಸೂಚನೆ ಸಂಖ್ಯೆ : ಕಾಇ 45 ಎಲ್‌ಡಬ್ಲ್ಯೂಎ 2011, ದಿನಾಂಕ : 1–6–2011ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ : 3–7–2011 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ: 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "ಇಂಡಸ್ಟ್ರಿ ಜನರೇಟಿಂಗ್ ಪವರ್" ಉದ್ಯಮವನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ : 3–1–2012 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಪ್ರಭು,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

**ಪಿ.ಆರ್. 153**

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಂಇ 131 ಮುನೋಮು 2011, ಬೆಂಗಳೂರು, ದಿನಾಂಕ : 14–2–2012.**

ಸಮ ಸಂಖ್ಯೆಯ ದಿನಾಂಕ : 8–12–2011ರ ಅಧಿಸೂಚನೆಯಲ್ಲಿನ "ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಕಾರ್ಪೋರೇಷನ್ (ಕರ್ನಾಟಕ) ಲಿ." ಎಂಬುದರ ಬದಲಾಗಿ "ಕರ್ನಾಟಕ ಸರ್ಕಾರ ಅಥವಾ ಕರ್ನಾಟಕ ಸರ್ಕಾರದ ಪರವಾಗಿ" ಎಂದು ಹಾಗೂ "ಗುತ್ತಿಗೆ ಕರಾರು ಪತ್ರ ನೋಂದಣಿಗೆ" ಎಂಬುದರ ಬದಲಾಗಿ " ಸದರಿ ಗುತ್ತಿಗೆ ಕರಾರು ಪತ್ರ ನೋಂದಣಿಗೆ ಪೂರ್ವಾನ್ವಯವಾಗಿ ಅಥವಾ ಭವಿಷ್ಯವರ್ತಿಯಾಗಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ಪಿ.ಆರ್. 154**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1127 ವೆಚ್ಚ–12/2011, ಬೆಂಗಳೂರು, ದಿನಾಂಕ : 7–2–2012.**

ಅಧಿಸೂಚನೆ ಸಂಖ್ಯೆ : ಲೋಇ 461 ಆಕೋ–3/2008, ದಿನಾಂಕ : 17–10–2008ರಲ್ಲಿ ನಗರಾಭಿವೃದ್ಧಿ ಇಲಾಖೆಯ Municipal Data Centre ನಲ್ಲಿ design, project management ಇವುಗಳ ಸೇವಾ ಸೌಲಭ್ಯವನ್ನು ಕೆಳಕಂಡ ಅಂಶಗಳಿಗೆ

i. General Infrastructure

ii. Technology Infrastructure

iii. Wide Area Network Consultancy Connectivity

iv. 24/7 operational management

ನೇರವಾಗಿ ಮೆ. Software Technology Park of India (STIP)ರವರಿಂದ ಪಡೆಯಲು ನೀಡಲಾಗಿದ್ದ ವಿನಾಯಿತಿಯನ್ನು ದಿನಾಂಕ : 17–10–2011 ರಿಂದ ಒಂದು ವರ್ಷ ಕಾಲಕ್ಕೆ ಮುಂದುವರೆಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ನಗರಾಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ನಗರಾಭಿವೃದ್ಧಿ ಇಲಾಖೆಯು ದೃಢಪಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 155**

## ಕಂದಾಯ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಆರ್‌ಡಿ 108 ಎಲ್‌ಜಿಕೆ 2011, ಬೆಂಗಳೂರು, ದಿನಾಂಕ : 24–2–2012.

ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್.ಡಿ 15 ಎಲ್.ಜಿ.ಕೆ. 2011, ದಿನಾಂಕ : 23–2–2011ರಲ್ಲಿ ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗೆ ಮಹಿಳಾ ಸದಸ್ಯರನ್ನಾಗಿ ನೇಮಿಸಲಾಗಿದ್ದ ಶ್ರೀಮತಿ ನಿರ್ಮಲ ಕೋಂ. ಹೆಚ್.ಆರ್. ಮಹೇಶ್‌ಬಾಬು ಹುಂಗೇನಹಳ್ಳಿ ಗ್ರಾಮ, ಕಸಬಾ ಹೋಬಳಿ, ಮಾಲೂರು ಇವರ ಬದಲಿಗೆ ಶ್ರೀಮತಿ ಎ. ವಸಂತ ಬಿನ್ ವೆಂಕಟೇಶಗೌಡ, ನೂಟವೇ ಗ್ರಾಮ, ಟೇಕಲ್ ಹೋಬಳಿ, ಮಾಲೂರು ತಾಲ್ಲೂಕು ಇವರನ್ನು ಸದರಿ ಸಮಿತಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

**ಬಿ.ಕೆ. ರಾಮಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ).

**ಪಿ.ಆರ್. 156**

## ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಒ 121 ಸಿಎನ್‌ಎಸ್ 2010, ಬೆಂಗಳೂರು, ದಿನಾಂಕ : 28–2–2012.

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 121 ಸಿಎನ್‌ಎಸ್ 2010, ದಿನಾಂಕ : 2–11–2010 ರಲ್ಲಿ ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಬಿ.ಜಿ. ಬಸವರಾಜಪ್ಪ ಬಿನ್ ಗೌಡರ ಬಸಪ್ಪ, ಎಂ. ಹನುಮನಹಳ್ಳಿ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ. ಸತೀಶ್,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ, ಸಹಕಾರ ಇಲಾಖೆ.

**ಪಿ.ಆರ್. 157**

## ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಒ 64 ಸಿಎನ್‌ಎಸ್ 2008, ಬೆಂಗಳೂರು, ದಿನಾಂಕ : 28–2–2012.

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ : 11) ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಗೋಕಾಕ್ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1. ಶ್ರೀ ಅಶೋಕ ವಸಂತ ಉದ್ದಪ್ಪನವರ್, ಕೌಜಲಗಿ ಗ್ರಾಮ, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ.
2. ಶ್ರೀ ಭೀಮಪ್ಪ ಅಲ್ಲಪ್ಪ ನಾಡಗೌಡ, ಧವಳೇಶ್ವರ ಗ್ರಾಮ, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ.
3. ಶ್ರೀಮತಿ ಲಕ್ಷ್ಮವ್ವ ಶಿವಪ್ಪ ಅಚಮಟ್ಟಿ, ಹಳ್ಳೂರ ಗ್ರಾಮ, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ. ಸತೀಶ್,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 158**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 125 ಎಂಎಲ್ಆರ್ 2008 (A-8)(P), ಬೆಂಗಳೂರು, ದಿನಾಂಕ : 25–2–2012.**

ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 11(1) (ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ : 18–11–2008 ರಲ್ಲಿ ಹೊರಡಿಸಲಾದ ಅಧಿಸೂಚನೆಯನ್ನು ರದ್ದುಪಡಿಸಿ, ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಾಯಚೂರು ನಗರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಎಸ್. ಜನಾರ್ಧನ ರೆಡ್ಡಿ, ಮುನ್ನೂರವಾಡಿ, ಮಕ್ಕಲಪೇಟ, ರಾಯಚೂರು.
2. ಶ್ರೀ ಬೇಲ್ದಾರ್ ಹನುಮಂತಪ್ಪ, ಮನೆ ನಂ. 6–5–87, ತಿಮ್ಮಾಪೂರ ಪೇಟೆ, ರಾಯಚೂರು.
3. ಶ್ರೀ ಯು. ವೆಂಕೋಬ, ಇಂದಿರಾನಗರ, ಸ್ಟೇಷನ್ ರೋಡ್, ರಾಯಚೂರು.
4. ಶ್ರೀ ಎನ್. ಶೇಖರರೆಡ್ಡಿ, ಶಾಸ್ತ್ರಿನಗರ, ರಾಯಚೂರು.
5. ಶ್ರೀಮತಿ ಸುಶೀಲ, ಕೋಂ. ಗಣೇಶ. ಬೇಸ್ತವಾರ ಪೇಟೆ, ರಾಯಚೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 159**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 15 ಎಲ್ಆರ್ಎ 2012, ಬೆಂಗಳೂರು, ದಿನಾಂಕ : 16–2–2012.**

ಉತ್ತರ ಕನ್ನಡ ಜಿಲ್ಲೆ ಹಳಿಯಾಳ ತಾಲ್ಲೂಕಿನ ಭೂ ನ್ಯಾಯ ಮಂಡಳಿಯ ನಾಮ ನಿರ್ದೇಶನಕ್ಕೆ ಸಂಬಂಧಿಸಿದ ಸರ್ಕಾರಿ ಅಧಿಸೂಚನೆ ಸಂಖ್ಯೆ : ಆರ್‌ಡಿ 47 ಎಲ್ಆರ್ಎ 2011, ದಿನಾಂಕ : 24–11–2011ರಲ್ಲಿ ಕೆಲವು ದೋಷಗಳನ್ನು ಹೊಂದಿದ್ದ ಹಿನ್ನೆಲೆಯಲ್ಲಿ ಉಲ್ಲೇಖಿತ ಅಧಿಸೂಚನೆ ರದ್ದುಗೊಳಿಸಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ರ ಕಲಂ 48ರ ಉಪ ಕಲಂ (1) ರಿಂದ (3) ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಉತ್ತರ ಕನ್ನಡ ಜಿಲ್ಲೆ ಹಳಿಯಾಳ ತಾಲ್ಲೂಕಿನ ಭೂ ನ್ಯಾಯ ಮಂಡಳಿಗೆ ಕೆಳಕಂಡ ವ್ಯಕ್ತಿಗಳನ್ನು ದಿನಾಂಕ : 24–11–2011 ರಿಂದ ಅನ್ವಯಿಸುವಂತೆ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಹೆಸರು ಮತ್ತು ವಿಳಾಸ | | |
|---|---|---|
| 1. | ಶ್ರೀ ಪರಶುರಾಮ ವೀರಭದ್ರ ವಡ್ಡರ,<br>ಸಾ: ಹವಗಿ ಗ್ರಾಮ, ಹಳಿಯಾಳ ಹೋಬಳಿ. | ಪರಿಶಿಷ್ಟ ಜಾತಿ |
| 2. | ಶ್ರೀ ಆನಂದ ಗೌಡ,<br>ಗಂಗಾ ಗೌಡ, ಕುಮಾರ ಗೌಡರ,<br>ಸಾ: ಹುಣಸವಾಡ ಗ್ರಾಮ | |
| 3. | ಶ್ರೀ ರೋಬೆಟ್ ಲೂಯಿಸ್ ಕೇರವಾಡಕರ,<br>ಸಾ: ಯಡೋಗಾ ಗ್ರಾಮ, ದಾಂಡೇಲಿ ಹೋಬಳಿ | |
| 4. | ಶ್ರೀ ರೇಣುಕಾ ರಾಜಾ ರಾಮಚಂದ್ರ ಸಡೇಕರ,<br>ಸಾ: ಮುರ್ಕವಾಡ ಗ್ರಾಮ, ಮುರ್ಕವಾಡ ಹೋಬಳಿ | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪುಷ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. 160**

## KARNATAKA GOVERNOR'S SECRETARIAT

### NOTIFICATION

### No. GS 10 TUM 2011(P), Bangalore, dated 31st January 2012

Whereas, Dr. H. Maheshappa was appointed as Vice Chancellor, Visvesvaraya Technological University, Belgaum by the Chancellor of the University, vide notification dated 30-06-2010 for a period of 3 (three) years with effect from 02-07-2010.

Whereas, Writ Petition No. 2731/2011 (Public Interest Litigation) was filed in the High Court of Karnataka alleging that Dr. H.Maheshappa abtained the position of Vice Chancellor, Visvesvaraya Technological University by falsely claiming that he had passed B.E. (Mechanical Engineering) in I Class while he actually passed in II Class.

Whereas, the High Court of Karnataka, while disposing of the said Writ Petition on 13-01-2012, ordered :

**"Mr. Holla, learned Senior Counsel appearing for respondent No. 1 states that the Chancellor is quite willing to consider the matter once again, in view of the interpretations of the relevant Regulations. In these circumstances, the writ petition stands disposed of.**

**2. The proceedings before this court shall not be relevant for the Chancellor to arrive at a fresh decision as to whether respondent No.4 has obtained first class or second class in the relevant examination."**

Having regard to the above quoted order of the Hon'ble High Court of Karnataka "to consider the matter once again, in view of the interpretations of the relevant Regulations" and having regard to the nature of the allegations and the gravity of the issues, it is necessary to get the matter inquired into before arriving at an appropriate decision

Now, therefore, **I, H.R. BHARDWAJ, Governor of Karnataka and Chancellor of Visvesvaraya Technological University, Belgaum,** hereby appoint an Inquiry Commission consisting of **Justice Shri Abhay Gohil, retired Judge of Madhya Pradesh High Court and former Chairman of Appellate Authority of Industrial and Financial Reconstruction, New Delhi,** to conduct an inquiry into the allegations made against Dr. H. Maheshappa that he made false claims in his profile submitted for selection as Vice Chancellor, Visvesvaraya Technological University and the merits of the claim made by the Vice Chancellor.

The Commission of inquiry shall submit its findings on the inquiry into the allegations along with recommendation on the action to be taken. The Commission of inquiry shall also suggest the steps to be taken at the time of future appointment of Vice Chancellor, Visvesvaraya Technological University to ensure that such things do not recur.

The Inquiry Commission shall complete the inquiry and submit its report to the Chancellor within 3 (three) months from the date the Commission commences its work.

The secretarial assistance, transport and accommodation for the functioning of the Commission of Inquiry in Bangalore shall be provided by Visvesvaraya Technological University, Belgaum.

Justice Shri Abhay Gohil shall be entitled for TA and DA and Executive Class flight charges between New Delhi and Bangalore, being governed by the High Court Judges (Conditions of Service) Act, 1954 as amended from time to time.

The terms relating to remuneration will be issued separately.

**H.R. BHARDWAJ,**
Governor of Karnataka &
Chancellor

**V.S. JERE,**
Under Secretary to Governor.

**P.R. 98**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 32 ಬೆಂರೂಪ್ರಾ 2012, ಬೆಂಗಳೂರು, ದಿನಾಂಕ 2ನೇ ಫೆಬ್ರವರಿ 2012**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಪ್ರಕರಣ 3(3)(ಎ) ಮತ್ತು (4)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ದತ್ತಾತ್ರಿ, ಬಿನ್ ಪಿ.ವಿ. ಸೂರ್ಯನಾರಾಯಣ ರಾವ್, "ಆಶ್ರಿತ್" 1ನೇ ತಿರುವು, 60 ಅಡಿ ರಸ್ತೆ, ವಿನೋಬನಗರ, ಶಿವಮೊಗ್ಗ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಇಚ್ಛಾನುಸಾರ ಅಥವಾ 3 ವರ್ಷದ ಅವಧಿಯವರಿಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಶ್ರೀ ಎಸ್. ಜ್ಞಾನೇಶ್ವರ್ ಬಿನ್ ಸಿ. ಸಿದ್ದಪ್ಪ ಇವರ ಸ್ಥಾನದಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 104**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಇ 378 ಎಂಆರ್‌ಇ 2011, ಬೆಂಗಳೂರು, ದಿನಾಂಕ 27ನೇ ಜನವರಿ 2012**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 10(i)(iv) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು "ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ, ಅಫ್ಜಲಪುರ" ಸಂಘದ ಸದಸ್ಯರಾದ ಶ್ರೀ ಚನ್ನಬಸಯ್ಯ ಶಾಂತಯ್ಯ ಹಿರೇಮಠ, ಅಫ್ಜಲಪುರ" ಇವರನ್ನು ಗುಲ್ಬರ್ಗಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವ ಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಹಕಾರ ಇಲಾಖೆ.

**ಪಿ.ಆರ್. 105**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 105 ಮುಆಬಿ 2011, ಬೆಂಗಳೂರು, ದಿನಾಂಕ 30ನೇ ಜನವರಿ 2012**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997) ಕಲಂ 23ರ ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಸಿರಿಗೆರೆ ಗ್ರಾಮದ ಶ್ರೀ ಹನುಮಂತ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997) ರ ಕಲಂ 35ರ ಮೇರೆಗೆ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**ಪಿ.ಆರ್. 106**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 425 ಬೆಮಪ್ರಾ 2011, ಬೆಂಗಳೂರು, ದಿನಾಂಕ 4ನೇ ಫೆಬ್ರವರಿ 2012**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಪ್ರಕರಣ 3(3)(ಎಲ್)(ಎಂ) ಮತ್ತು (4) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ಬಿಜಾಪುರ ನಗರಾಭಿವೃದ್ಧಿ ಪ್ರಾಧಿಕಾರದ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಇಚ್ಛಾನುಸಾರ ಅಥವಾ 3 ವರ್ಷದ ಅವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ವರ್ಗ | ಜವಾಬ್ದಾರಿ |
|---|---|---|---|
| 1 | ಶ್ರೀಮತಿ ಶಾರದಾ ತಾಯಿ ಬಸಯ್ಯ ಹಿರೇಮಠ, ಸಾ॥ ಬಿಜಾಪುರ | ಮಹಿಳೆ | ಸದಸ್ಯರು |
| 2 | ಶ್ರೀ ವಿನಾಯಕ ಅಶೋಕ ಐಜ್ಜಂತೆಕರ | ಶಿಲ್ಪಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 107**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ನಅಇ 318 ಬೆಮಪ್ರಾ 2011, ಬೆಂಗಳೂರು, ದಿನಾಂಕ 13ನೇ ಜನವರಿ 2012

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಪ್ರಕರಣ 3(3)(ಎ) ಮತ್ತು 4ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಭೀಮಾಶಂಕರ ಯೋಗಪ್ಪ ಹದನೂರ್, ಗೋಡಬೋಲೆ ಮಾಳಾ, ತಿಲಕ್ ರೋಡ್, ಬಿಜಾಪುರ ಇವರನ್ನು ಬಿಜಾಪುರ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಸರ್ಕಾರದ ಇಚ್ಛಾನುಸಾರ ಅಥವಾ 3 ವರ್ಷದ ಅವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ನಾಮ ನಿರ್ದೇಶನ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 108**

## ಸಹಕಾರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಸಇ 43 ಎಂಆರ್ಇ 2012, ದಿನಾಂಕ 2ನೇ ಫೆಬ್ರವರಿ 2012

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶಿರಸಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ.

| ಕ್ರಮ ಸಂಖ್ಯೆ | ಸದಸ್ಯರ ಹೆಸರು / ಶ್ರೀಯುತರು/ಶ್ರೀಮತಿ |
|---|---|
| 1 | ಅಶೋಕ ಕೆ. ನಾಯ್ಕ,<br>ಅಂಚೆ, ಮಧುರವಳ್ಳಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |
| 2 | ಶ್ರೀಧರ ಗೌಡ,<br>ಕಂಬಳೀಸರ, ಪೋ, ಕಾನಗೋಡ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |
| 3 | ನರಸಿಂಹ ಹೆಗಡೆ,<br>ಭಕ್ಕಳ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವ ಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಹಕಾರ ಇಲಾಖೆ.

**ಪಿ.ಆರ್. 109**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಆಇ 01 ವೆಚ್ಚ–12/2012, ದಿನಾಂಕ 30ನೇ ಜನವರಿ 2012

ಪೊಲೀಸ್ ಕಾನ್ಸ್‌ಟೇಬಲ್–KSISF 2011ರ ಹುದ್ದೆಗಳ ನೇರನೇಮಕಾತಿಯನ್ನು ರೂ.41,20.000 ಗಳ ವೆಚ್ಚದಲ್ಲಿ ಹಾಗೂ ಸಬ್ ಇನ್ಸ್‌ಪೆಕ್ಟರ್–KSISF 2011ರ ಹುದ್ದೆಗಳ ನೇರನೇಮಕಾತಿಯನ್ನು ರೂ.14,80,000 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಒಳಾಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಒಳಾಡಳಿತ ಇಲಾಖೆಯು ದೃಢಪಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಡಿ. ಮಧುಚಂದ್ರ ತೇಜಸ್ವಿ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 110**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಆಇ 26 ವೆಚ್ಚ–12/2012, ದಿನಾಂಕ 30ನೇ ಜನವರಿ 2012

'ಸಂಚಾರಿ ಬೆಂಗಳೂರು ಒನ್' ಯೋಜನೆಯನ್ನು ಜಾರಿಗೊಳಿಸುವ ಸಂಬಂಧ ಮಿನಿಬಸ್‌ನ fabrication ಮತ್ತು ಒಳಾಂಗಣ ವಿನ್ಯಾಸ ಕಾರ್ಯವನ್ನು ರೂ. 4,56,296/– ವೆಚ್ಚದಲ್ಲಿ ನೇರವಾಗಿ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ (ಬಿ.ಎಂ.ಟಿ.ಸಿ.) ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಿ.ಆ.ಸು. (ಇ–ಆಡಳಿತ) ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಿ.ಆ.ಸು. (ಇ–ಆಡಳಿತ) ಇಲಾಖೆಯು ದೃಢಪಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಡಿ. ಮಧುಚಂದ್ರ ತೇಜಸ್ವಿ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 111**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಆರ್‌ಡಿ 67 ಎಲ್‌ಜಿಸಿ 2011, ದಿನಾಂಕ 04ನೇ ಫೆಬ್ರವರಿ 2012

ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 73 ಎಲ್‌ಜಿಸಿ 2010, ದಿನಾಂಕ 25–11–2010ರ ಅಧಿಸೂಚನೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಜಗಳೂರು | 1) ಶ್ರೀ ಎಸ್.ವಿ. ರಾಮಚಂದ್ರ, ಶಾಸಕರು, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ. | ಅಧ್ಯಕ್ಷರು |

| | | | |
|---|---|---|---|
| | | 2) ಶ್ರೀ ವೀರೇಶ್ ಬಿನ್ ಶರಣಪ್ಪ,<br>ಚಿಕ್ಕಮಲ್ಲನಹೊಳೆ, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ. | ಸದಸ್ಯರು<br>(ಸಾಮಾನ್ಯ) |
| | | 3) ಶ್ರೀ ಮಹೇಶ್ವರಪ್ಪ ಬಿನ್ ಮೈಲಾರಪ್ಪ,<br>ಬಿಳಿಚೋಡು, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ. | ಸದಸ್ಯರು<br>(ಪ.ವರ್ಗ) |
| | | 4) ಶ್ರೀಮತಿ ರೇಣುಕಾ ಕೋಂ ವೆಂಕಟೇಶ್,<br>ಮುಸ್ಟೂರು, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ. | ಸದಸ್ಯರು<br>(ಮಹಿಳೆ) |
| | | 5) ತಹಶೀಲ್ದಾರ್, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ. | ಸದಸ್ಯ–ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

**ಪಿ.ಆರ್. 113**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಸಿಆಸುಇ 3 ಎಸ್‌ಎಂಆರ್ 2012, ದಿನಾಂಕ 6ನೇ ಫೆಬ್ರವರಿ 2012

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–1ರ ಐಟಂ 292ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ:–

(293) ಮಹಾವೀರ್ ಮೆಡಿಕಲ್ ಸೆಂಟರ್, ಜನರಲ್ ಹಾಸ್ಪಿಟಲ್ (ಮೆಡಿಕಲ್, ಸರ್ಜಿಕಲ್, ಮೆಟರ್ನಿಟಿ ಮತ್ತು ಆರ್ಥೋಪೆಡಿಕ್ ಸೆಂಟರ್), ಬೋಳವಾರ, ಪುತ್ತೂರು–574 201, ದಕ್ಷಿಣ ಕನ್ನಡ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 3 SMR 2012, Bangalore, dated 6th February, 2012

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after item 292 of Schedule I to the said rules, namely:-

(293) Mahaveer Medical Centre, General Hospital (Medical, Surgical, Maternity & Orthopaedic Centre), Bolwar, Puttur-574201, Dakshina Kannada District.

By Order and in the name of the Governor of Karnataka,

**D. NAGESH PHATAK,**
Under Secretary to Government,
Department of Personnel and Administrative Reforms
(Service Rules-2).

**P.R. 114**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಕಂಇ 198 ಮುನೋಮು 2011, ದಿನಾಂಕ 06ನೇ ಫೆಬ್ರವರಿ 2012

ಕರ್ನಾಟಕ ಮುದ್ರಾಂಕ ಕಾಯ್ದೆ, 1957 ಕಲಂ 9(1)(ಎ) ರಲ್ಲಿ ಹಾಗೂ ನೋಂದಣಿ ಕಾಯ್ದೆ 1908 (ಕೇಂದ್ರೀಯ ಕಾಯ್ದೆ 1908 xiii) ರ ಕಲಂ 78 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಭೂ ಸ್ವಾಧೀನ ಪಡಿಸಿಕೊಂಡ ಜಮೀನಿಗೆ ನಗದು ಪರಿಹಾರ ನೀಡುವ ಬದಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ "ಹೊಸ ಪರಿಹಾರ ನೀತಿ" ಯಡಿ ಅಭಿವೃದ್ಧಿ ಪಡಿಸಿದ ನಿವೇಶನಗಳನ್ನು ಶೇ.60:40ರ ಅನುಪಾತದಲ್ಲಿ ಪಡೆದ ಭೂ ಮಾಲೀಕರಿಗೆ ಕ್ರಯ ಪತ್ರಗಳ ನೋಂದಣಿ ದಸ್ತಾವೇಜುಗಳಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿಯನ್ನು ಮತ್ತು ನೋಂದಣಿ ಶುಲ್ಕದಲ್ಲಿ ಪೂರ್ಣ ವಿನಾಯಿತಿಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 998 ಇಎಕ್ಸ್‌ಪಿ–7/2011, ದಿನಾಂಕ 12–01–2012 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ನೋಂದಣಿ ಮತ್ತು ಮುದ್ರಾಂಕ).

**ಪಿ.ಆರ್. 115**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಅಪಜೀ 5 ಎಫ್‌ಎಎಫ್ 2010, ದಿನಾಂಕ 10ನೇ ನವೆಂಬರ್ 2011

ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ 1976 ರನ್ವಯ, ಸರ್ಕಾರವು ಉಡುಪಿ ಜಿಲ್ಲೆಗೆ ಈ ಕೆಳಕಂಡಂತೆ ವೃಕ್ಷ ಪ್ರಾಧಿಕಾರವನ್ನು ರಚಿಸಿದೆ.

| | | |
|---|---|---|
| (1) | ಅರಣ್ಯ ಸಂರಕ್ಷಣಾಧಿಕಾರಿ, ಮಂಗಳೂರು ವೃತ್ತ, ಮಂಗಳೂರು | ಅಧ್ಯಕ್ಷರು |
| (2) | ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ | ಸದಸ್ಯರು |
| (3) | ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಮಂಗಳೂರು | ಸದಸ್ಯರು |
| (4) | ಡಾ॥ ಎನ್.ಎ. ಮಧ್ಯಸ್ಥ, ನಿವೃತ್ತ ಪ್ರಾಂಶುಪಾಲರು, ಪೂರ್ಣಪ್ರಜ್ಞಾ ಕಾಲೇಜು, "ಇಂಚರ" ಶ್ರೀನಿವಾಸ ನಗರ, ಚಿಟ್‌ಪಾಡಿ, ಉಡುಪಿ | ಸದಸ್ಯರು |
| (5) | ಡಾ॥ ಕೆ. ಗೋಪಾಲಕೃಷ್ಣ ಭಟ್, ಪ್ರೋಫೆಸರ್ ಆಫ್ ಬಾಟನಿ (ವೃತ್ತ) "ಮಧುಕ" ಶ್ರೀನಿವಾಸ ನಗರ, ಚಿಟ್‌ಪಾಡಿ, ಉಡುಪಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಆರ್. ಅನಂತರಾಮು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 116**

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 85 SSC 2010, Bangalore, dated 30-01-2012

In exercise of the powers conferred by Article 318 of the Constitution of India, the Governor of Karnataka hereby makes the following rules further to amend the Karnataka Public Service Commission (Conditions of Service) Regulfions, 1957, namely:-

1. **Title and Commencement.-** (1) These regulations may be called the Karnataka Public Service Commission (Conditions of Service) (Amendment) Regulations, 2011.

   (2) They shall come into force from the date of publication in the official Gazette.

